# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 457 |
| ಸದಸ್ಯರ ಹೆಸರು | : | ಶ್ರೀ ಕೆ.ವಿ.ನಾರಾಯಣಸ್ವಾಮಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |
| ಉತ್ತರಿಸಬೇಕಾದ ದಿನಾಂಕ | : | 10.12.2020 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆಯಲ್ಲಿ 2019-20ನೇ ಸಾಲಿನಲ್ಲಿ ಪಿ.ಡಿ.ಖಾತೆಯಲ್ಲಿರುವ ಅನುದಾನವನ್ನು ಶಾಸಕರಿಗೆ 2.00 ಕೋಟಿಯವರೆಗೂ ಬಿಡುಗಡೆ ಮಾಡುವಂತೆ ಸೂಚಿಸಿ ಸರ್ಕಾರದಿಂದ ಪತ್ರ ಬರೆಯಲಾಗಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಇಲ್ಲಿಯವರೆಗೂ ಎಷ್ಟು ಶಾಸಕರು ನೀಡಿದ 2.00 ಕೋಟಿಯವರೆಗಿನ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲಾಗಿದೆ; | ಮೈಸೂರು ಜಿಲ್ಲೆಯಲ್ಲಿ 11 ಮಾನ್ಯ ವಿಧಾನ ಸಭಾ ಮತ್ತು 4 ವಿಧಾನ ಪರಿಷತ್ ಸದಸ್ಯರುಗಳಿದ್ದು, ಇವರುಗಳ ಪೈಕಿ ಚಾಮುಂಡೇಶ್ವರಿ ಮತ್ತು ಪಿರಿಯಾಪಟ್ಟಣ ವಿಧಾನ ಸಭಾ ಶಾಸಕರುಗಳು ಮಾತ್ರ ರೂ.2.00 ಕೋಟಿಗಳಿಗೆ ಕಾಮಗಾರಿಗಳನ್ನು ನೀಡಿದ್ದು, ಇನ್ನುಳಿದ ಶಾಸಕರುಗಳು ರೂ.2.00 ಕೋಟಿಗಳಿಗೆ ಕಾಮಗಾರಿಗಳನ್ನು ನೀಡಿರುವುದಿಲ್ಲ.<br><br>ಪ್ರಸ್ತುತ, ಮೈಸೂರು ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ರೂ.41.50 ಕೋಟಿಗಳ ಅನುದಾನ ಲಭ್ಯವಿದ್ದು, ಅನುದಾನದ ಕೊರತೆ ಇರುವುದಿಲ್ಲ. |
| ಇ) | ಅನುದಾನ ಬಿಡುಗಡೆ ಮಾಡದಿದ್ದಲ್ಲಿ ಕಾರಣಗಳೇನು; | ಆರಂಭಿಕ ಶಿಲ್ಕು ಮತ್ತು ಬಿಡುಗಡೆಯಾದ ಅನುದಾನದಲ್ಲಿ ಶೇ 75 ರಷ್ಟು ವೆಚ್ಚ ಮಾಡದ ಕಾರಣದಿಂದ ಉಳಿದ ಅನುದಾನವನ್ನು ಬಿಡುಗಡೆಯಾಗಿರುವುದಿಲ್ಲ. |
| ಈ) | ಅನುದಾನ ಕೊರತೆಯಿದ್ದಲ್ಲಿ, ಸರ್ಕಾರ ಸೂಚಿಸಿರುವಂತೆ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಸರ್ಕಾರಕ್ಕೆ ಪತ್ರ ಬರೆಯಲಾಗಿದೆಯೇ; ಬರೆದಿದ್ದಲ್ಲಿ, ಸದರಿ ಪತ್ರಕ್ಕೆ ಸರ್ಕಾರದಿಂದ ಬಂದ ಉತ್ತರವೇನು; | ಆರ್ಥಿಕ ಇಲಾಖೆಯ ಆದೇಶದಂತೆ ಆರಂಭಿಕ ಶಿಲ್ಕು ಮತ್ತು ಬಿಡುಗಡೆಯಾದಅನುದಾನ ಸೇರಿ ಒಟ್ಟಾರೆ ಶೇ 75 ರಷ್ಟು ವೆಚ್ಚ ಭರಿಸಿ ಉಳಿದ ಅನುದಾನ ಬಿಡುಗಡೆಗಾಗಿ ಮೈಸೂರು ಜಿಲ್ಲೆಯಿಂದ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಉ) | ಪ್ರಸ್ತುತ ಪಿ.ಡಿ ಖಾತೆಯಲ್ಲಿರುವ ಅನುದಾನವೆಷ್ಟು; ಪ್ರತಿ ಶಾಸಕರಿಗೆ 2.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಕೊರತೆಯಿರುವ ಅನುದಾನದ ಮೊತ್ತವೆಷ್ಟು? | ಪ್ರಸ್ತುತ ಮೈಸೂರು ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ರೂ.41.50 ಕೋಟಿಗಳ ಅನುದಾನ ಲಭ್ಯವಿದ್ದು,<br><br>ಪ್ರತಿ ಶಾಸಕರಿಗೆ ರೂ.2.00 ಕೋಟಿಗಳ ಅನುದಾನ ಬಿಡುಗಡೆ ಮಾಡಲ ಅನುದಾನದ ಕೊರತೆ ಇರುವುದಿಲ್ಲ. |

ಸಂಖ್ಯೆ:ಪಿಡಿಎಸ್ 98 ಕೆಎಲ್ಎಸ್ 2020

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ